CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು



| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮಾರ್ಚ್ ೩೧, ೨೦೦೫ (ಚೈತ್ರ ೧೦, ಶಕ ವರ್ಷ ೧೯೨೭) | ಸಂಚಿಕೆ ೧೩ |
|---|---|---|



## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

**ವಿಷಯ :** ದಿನಾಂಕ: 24.11.1980 ಕ್ಕಿಂತ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸಲು ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂ: ಅಪಜೀ 361 ಎಫ್‌ಜಿಎಲ್ 02, ದಿನಾಂಕ: 1.12.2003.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪತ್ರ ಸಂಖ್ಯೆ: ಎ5:(4) ಜಿಎಫ್‌ಎಲ್: ಸಿಆರ್:24/79-80 ದಿನಾಂಕ: 15.3.04.
3. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರ ಪತ್ರ ಸಂ: ಎ5(4) ಜಿಎಫ್‌ಎಲ್: ಸಿಆರ್:1: 04-05, ದಿನಾಂಕ: 18.5.04.

**ಪ್ರಸ್ತಾವನೆ:**

ದಿನಾಂಕ: 1.12.03ರ ಸರ್ಕಾರದ ಆದೇಶದಲ್ಲಿ ದಿನಾಂಕ: 24.10.1980ರ ಪೂರ್ವದ ಅರಣ್ಯ ಭೂಮಿಯಲ್ಲಿನ ಅತಿಕ್ರಮಣಗಳನ್ನು ಸಕ್ರಮಗೊಳಿಸಲು ಅತಿಕ್ರಮಣದಾರರ ಬಳಿ ಅವರ ಕೋರಿಕೆಯನ್ನು ಸಾಬೀತುಪಡಿಸಲು ಯಾವುದೇ ದಾಖಲಾತಿಗಳನ್ನು ಒದಗಿಸಲು ಸಾಧ್ಯವಾಗದೇ ಹೋದಂತಹ ಪ್ರಕರಣಗಳನ್ನು ಪರಿಶೀಲಿಸಿ ಸರ್ಕಾರಕ್ಕೆ ಶಿಫಾರಸ್ಸು ಮಾಡುವ ಉದ್ದೇಶಕ್ಕಾಗಿ ಅಧಿಕಾರೇತರ ಸದಸ್ಯರ ಅಧ್ಯಕ್ಷತೆಯಲ್ಲಿ ತಾಲ್ಲೂಕು ಮಟ್ಟದ ಸಮಿತಿಯನ್ನು ರಚಿಸಲಾಗಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರು ಲೋಕಸಭೆ ಮತ್ತು ವಿಧಾನ ಸಭೆಯ ಸಾರ್ವತ್ರಿಕ ಚುನಾವಣೆಯ ನೀತಿ ಸಂಹಿತೆಯಂತೆ ದಿನಾಂಕ: 1.12.2003ರ ಸರ್ಕಾರಿ ಆದೇಶದಂತೆ ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳ ಕಾರ್ಯವನ್ನು ತಕ್ಷಣದಿಂದ ಸ್ಥಗಿತಗೊಳಿಸುವಂತೆ ಎಲ್ಲ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ನಿರ್ದೇಶನ ನೀಡಿರುತ್ತಾರೆ.

ಮೇಲೆ ಓದಲಾದ (3)ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿರವರು ಸರ್ಕಾರಕ್ಕೆ ದಿನಾಂಕ: 1.12.2003ರ ಸರ್ಕಾರಿ ಆದೇಶದಂತೆ ರಚಿಸಲಾದ ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸಲು ಕರ್ನಾಟಕ ಅರಣ್ಯ ನಿಯಮ 1963 ಮತ್ತು ಕರ್ನಾಟಕ ಅರಣ್ಯ ಕಾಯಿದೆ 1969 ಹಾಗೂ ಅರಣ್ಯ (ಸಂರಕ್ಷಣೆ) ಕಾಯಿದೆ 1960ರಲ್ಲಿ ಅವಕಾಶ ಇಲ್ಲದಿರುವುದರಿಂದ ಈ ಸಮಿತಿಗಳು ನೀಡುವ ನಿರ್ಣಯಗಳು ಸಿಂದುವಲ್ಲವೆಂದು ಹಾಗೂ ಇದರ ಬಗ್ಗೆ ನ್ಯಾಯಾಲಯದಲ್ಲಿ ಪ್ರಶ್ನಿಸಬಹುದಾದರಿಂದ ಈ ಸಮಿತಿಗಳನ್ನು ರದ್ದುಗೊಳಿಸಿ ಆದೇಶವನ್ನು ವಾಪಸ್ಸು ಪಡೆಯುವಂತೆ ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಸೂಚಿಸಿರುವ ಅಂಶಗಳನ್ನು ಗಣನೆಗೆ ತೆಗೆದುಕೊಂಡು ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ್ದು ಈಗಾಗಲೇ ರಚಿಸಿರುವ ತಾಲ್ಲೂಕು ಮಟ್ಟದ ಸಮಿತಿಗಳ ಕಾರ್ಯಾಚರಣೆಯನ್ನು ಮುಂದುವರಿಸಲು ನಿರ್ಣಯಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 2 ಎಫ್‌ಜಿಎಲ್ 05, ಬೆಂಗಳೂರು ದಿನಾಂಕ: 2ನೇ ಮಾರ್ಚ್ 2005**

ಪ್ರಸ್ತಾವನೆಯನ್ನು ಎಲ್ಲ ಕೋನಗಳಿಂದ ಪರಿಶೀಲಿಸಿ ಈಗಾಗಲೇ ದಿನಾಂಕ: 1.12.2003ರ ಸರ್ಕಾರ ಆದೇಶ ಸಂ: ಅಪಜೀ 361 ಎಫ್‌ಜಿಎಲ್ 02 ರಂತೆ ಪೂರ್ಣವಾಗಿ ಹಾಗೂ ಭಾಗಶಃ ರಚನೆಯಾದ ಸಮಿತಿಗಳನ್ನು ತಕ್ಷಣದಿಂದ ಕಾರ್ಯನಿರ್ವಹಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಸ್. ಆರ್. ವತ್ಸಲ

ಪಿ.ಆರ್.355

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**FOREST, ECOLOGY AND ENVIRONMENT SECRETARIAT**

**Sub :** Diversion of 4.10 ha. of forest land in Kemphole and Moorkannugudda RE for establishment of Kadumane Mini Hydel Scheme by M/s Paschim Holdings Pvt. Ltd-change of name of user agency from M/s Paschim Hydro Energy Private Limited.

**Read :**
1. G.O. No. FEE 269 FGL 2002 dated: 2.12.2004.
2. Letter dated: 3.12.2004 of the Paschim Hydro Energy Pvt. Ltd., Hyderabad.
3. Letter No. A5(3) GFL:CR/1/04-05, dated: 5.1.2005 of the Principal Chief Conservator of Forests, Bangalore.
4. State Government letter No. FEE 201 FLL 2004, dated: 1.2.2005.
5. Letter No. F(C)A/11.2/269/KAR/HEP, dated: 22.2.2005 of Government of India. Ministry of Environment and Forests, Regional Officer, (South Zone), Bangalore.

**Preamble:**

In Government Order No. FEE 269 FGL 2002 dated: 2.12.2004 read at (1) above, sanction is accorded under Section 2 of Forest (Conservation) Act, 1980 for diversion of 4.10 Ha. of forest land in Sy. No. 387 and 400 of Heggadde Village and Sy. No. 68 of Kadumane Village in Kemphoic and Moorkannugudda Reserve Forest, Sakaleshpur Taluk, Hassan District for estabishment of Kadumane Mini Hydel Scheme-I by M/s Paschim Holdings Private Limited, Hyderabad subject to certain conditions.

M/s Paschim Hydre Energy Pvt. Ltd., Hyderabad vide their letter read at (2) above requested to incorporate the change in name Paschim Holdings Pvt. Ltd., to Paschim Hydro Energy Pvt. Ltd., Hyderabad in the G.O. FEE 269 FGL 2002, dated: 2.12.2004 to impment the Kadumane Mini Hydel Project Schme-I Project.

The Principal Chief Conservator of Forests, Bangalore vide his letter dated: 5.1.2005 read at (3) above has submitted that the user agency has submitted a copy of Government Order No. ED 260 NCE 2002, dated: 8.5.2003 of the Energy Department in which the name of M/s Paschim Holdings Pvt. Ltd., has been changed to M/s Paschim Hydro Energy Ltd., and requested to move the matter to Government of India for necessary changes in the approval accorded.

Accordingly, Government of India was requested vide State Government letter dated: 1.2.2005 read at (4) above.

Government of India Ministry of Environment and Forests, Regional Office, (South Zone), Bangalore vide their letter dated: 22.2.2005 read at (5) above has conveyed no objections for the above proposed change of name of user agency.

The proposal has been examined in detail and hence the following order.

**Government Order No. FEE 201 FLL 2004 Bangalore dated: 4th March 2005**

In the circumstances explained in the preamble and in accordance with no objection conveyed by the Government of India, Government here by direct that the name of the user agency- 'M/s Paschim Holdings Private Ltd., Hyderabad is changed to M/s Paschim Hydro Energy Private Limited, Hydrabad in respect of Diversion of 4.10 ha of forest land in Sy. No. 387 and 400 of Heggadde Village and Sy.No. 68 of Kadumane Village in Kemphole and Moorkannugudda Reserve Forest, Sakaleshpur Taluk, Hassan District for establishment of Kadumane Mini Hydel Schme-1 Project, All the conditions stipulated in the G.O.No.FEE 269 FGL 2002, dated: 2.12.2004 shall remain the same.

By Order and in the name of the Governor of Karnataka,

**S. R. VATSALA**

PR-358

Under Secretary to Government,

Forest, Ecology and Environment Department.

**Sub :** Diversion of 0.40 ha. of forest land in F.Sy.No. 89 of Venkatapura for construction of Sewage Treatment Plant in North Kanara district.

**Read :**
1. Letter No. A5(2)GFICR-1/BGM/99-2000, dated: 25.3/4.2003. and 17.11.2003 of Prineipal Chief consorvator of forest Bangalore.
2. State Government letter No FEE 53 FGL 2002, dated: 24.6.2003. and 1.12.2003.
3. Letter No. F(C)A/11.2/263/KAR/MISC/2162 dated: 19.1.2004 and 26.6.2004 of Government of India, Ministry of Environment and Forests. Regional Office, (South Zone), Bangalore.

**Preamble:**

The Principal Chief Conservator of Forests, Bangalore vide his letter dated: 25.3/4-2003 read at (1) above has submitted a proposal to State Government for diversion of an area 0.40 ha. of forest land in Sy.No.89 of Venkatapura for construction of Sewage Treatment in North Kanara District in favour of lown Muncipal Council, Bhatkal.

Accordingly, the proposal was recommended to Government of India for approval under section (2) of Forest (Conservation) Act 1980 vide State Government letter dated: 24.6.2003 read at (2) above.

The Government of India, Ministry of Environment and Forests, Regional Office, (South Zone), Bangalore has agreed to the proposal in principle (Stage-1) vide their letter dated: 19.1.2004 read at (3) above subject to certain conditions.

The compliance report on the condition has been sent to Government of India vide State Government letter dated: 1.12.2003 read at (2) above.

The Government of India. Ministry of Environment and Forests, Regional Office, (South Zone), Bangalore in their letter dated: 26.6.2004 read at (3) above has conveyed its final approval (Stage-II) in accordance with Section 2 of Forest (Conservation) Act, 1980 for the diversion of an area 0.40 ha. of forest land in Sy. No. 89 of Venkatapura for construction of Sewage Treatment in North Kanara District in favour of Town Muncipal Council, Bhatkal with certain conditions.

The proposal has been examined in the fight of the final approval given by the Government of India and the following order are issued.

**Government Order No. FEE 53 FGL 2002 Bangalore dated: 26th February 2005**

After careful consideration of the proposal and under the circumstances explained in the preamble Government are pleased to accord approval under Section (2) of Forest (Conservation) Act 1980 for diversion of an area 0.40 ha of forest land in Sy.No. 89 of Venkatapura for construction of Sewage treatment in North Kanara District in favour of Chief Officer, Iown Muncipal Council, Bhatkal Subject to the following conditions.

1. The legal status of forest land shall remain unchanged.
2. Demarcation of the forest area shall be got done by angle iron post with barbed wire fencing at the cost of the user agency.
3. The lessee has to pay the NPV fixed in the G.O. No. FEE 24/FGL/02 dated: 17.1.2001 All the funds obtained as NPV of diverted forest land should be deposited with CAMPA.
4. The total forest area utilized for the project shall not exceed 0.40 ha. It case the land is not used for the stipulated purpose, then the area will be resumed by the Forest Department.
5. The land shall be utilized only for the above purpose for which it is released.
6. If the land is not required for the above purpose the same should be resumed back to the Forest Department by the Deputy Conservator of Forests.
7. The user agency has to pay the lease rent as fixed by the Government at the time of sanction and any subsequent orders in this regard. The two yeas lease rent shall be paid in advance at the time of handing over of the land.
8. The lease is for 20 years.
9. Karnataka Forest Act 1963 and Rules 1969 will be applicable for any violation.
10. If the land is not utilized for the purpose for which it is diverted within 2 years, the forest land shall be resumed back by the Deputy Conservator of Forests.
11. Any other conditions to be stipulated by the State Government/Principal Chief Conservator of Forests, Karnataka in the interest of conservation of forests.

By Order and in the name of the Governor of Karnataka,

**S. R. VATSALA**

PR-359

Under Secretary to Government,

Forest, Ecology and Environment Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಶ್ರೀ ಪಾಪಯ್ಯ ರಾಜು, ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರ ಹಕ್ಕಿನಲ್ಲಿರುವ ರಜೆ: ವೇತನ ರಹಿತ ರಜೆ ಮಂಜೂರಾತಿ ಬಗ್ಗೆ.

**ಓದಲಾಗಿದೆ :** 1. ಸಹ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರ ಟಿಪ್ಪಣಿ ದಿನಾಂಕ: 3.1.2005.

**ಪ್ರಸ್ತಾವನೆ:**

ಸಹ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರ ಉಲ್ಲೇಖದ ಟಿಪ್ಪಣಿ ದಿನಾಂಕ: 3.1.2005ರಲ್ಲಿ ಶ್ರೀ ಜಿ. ಪಾಪಯ್ಯ ರಾಜು, ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರು ಮೇ 2003 ರಿಂದ ಡಿಸೆಂಬರ್ 2003 ರವರೆಗಿನ ಅವಧಿಯಲ್ಲಿ 26 ದಿನಗಳು ಹಾಗೂ ಜನವರಿ 2004 ರಿಂದ ಅಕ್ಟೋಬರ್ 2004 ರವರೆಗಿನ ಅವಧಿಯಲ್ಲಿ ಒಟ್ಟು 73 ದಿನಗಳು ಹಾಗೂ ಮೆದು ಸಮಯದನ್ವಯ 6 ದಿನಗಳು ಇವರು ಕಛೇರಿಗೆ ಗೈರು ಹಾಜರಾಗಿರುವರೆಂದು ತಿಳಿಸಿ ಇವರ ಗೈರು ಹಾಜರಾತಿ ಕುರಿತು ಇವರಿಗೆ ಹಲವಾರು ನೋಟೀಸುಗಳನ್ನು ನೀಡಲಾಗಿದ್ದರೂ ಸಹ ಇವರಿಂದ ಸಮಂಜಸವಾದ ಉತ್ತರಗಳು ಬಂದಿರುವುದಿಲ್ಲವಾದುದರಿಂದ ಹಾಗೂ ಈ ಅಧಿಕಾರಿಯು ಕಛೇರಿಯ ಕೆಲಸ ಕಾರ್ಯಗಳಲ್ಲಿ ಹೆಚ್ಚಿನ ಆಸಕ್ತಿ ತೋರಿಸದೆ ಸಮಯಕ್ಕೆ ಸರಿಯಾಗಿ ಕಛೇರಿಗೆ ಬಾರದಿರುವ ಮತ್ತು ಅನಧಿಕೃತ ಗೈರು ಹಾಜರಾಗುವ ಪ್ರವೃತ್ತಿಯನ್ನು ಹೊಂದಿದ್ದು, ಇವರಿಂದ ಕಛೇರಿಯ ಕೆಲಸಗಳಿಗೆ ಹೆಚ್ಚಿನ ಧಕ್ಕೆ ಉಂಟಾಗುತ್ತಿರುವುದರಿಂದ ಇವರ ಗೈರು ಹಾಜರಿಯ ಒಟ್ಟು 105 ದಿನಗಳನ್ನು ಅವರ ಹಕ್ಕಿನಲ್ಲಿರುವ ರಜೆಯನ್ನು ಮಂಜೂರು ಮಾಡಲು ಅಥವಾ ಅವರ ಲೆಕ್ಕದಲ್ಲಿ ರಜೆ ಇಲ್ಲದಿದ್ದಲ್ಲಿ ವೇತನ ರಹಿತ ರಜೆ ಮಂಜೂರು ಮಾಡುವಂತೆ ಶಿಫಾರಸ್ಸು ಮಾಡಿ ಇವರು ಕೋರಿರುವಂತೆ ಇವರಿಗೆ ಸ್ವಿಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ತಿಳಿಸಿರುವರು.

ಈ ಅಧಿಕಾರಿಯವರು ದಿನಾಂಕ: 31.3.2005ಕ್ಕೆ ಸ್ವಇಚ್ಛಾ ನಿವೃತ್ತಿ ಹೊಂದಲು ಅನುಮತಿ ನೀಡುವಂತೆ ಕೋರಲಾಗಿದ್ದು, ಸೇವಾ ಪುಸ್ತಕದ ಅನುಸಾರ ಇವರು ಸ್ವಇಚ್ಛಾ ನಿವೃತ್ತಿ ಕೋರಿರುವ ದಿನಾಂಕ: 31.3.2005ರ ಅಂತ್ಯಕ್ಕೆ ಇವರ ಖಾತೆಯಲ್ಲಿ 22 ದಿನಗಳ ಗಳಿಕೆ ರಜೆ ಮತ್ತು 7 ದಿನಗಳ ಅರ್ಧ ವೇತನ ರಜೆ ಜಮೆ ಇರುತ್ತದೆ.

ಶಿಕ್ಷಣ ಇಲಾಖೆಯ ಸಹ ಕಾರ್ಯದರ್ಶಿ ಇವರು ಶ್ರೀ ಜಿ. ಪಾಪಯ್ಯ ರಾಜು, ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರು ಕಛೇರಿಗೆ ಗೈರು ಹಾಜರಾದ ಒಟ್ಟು 105 ದಿನಗಳನ್ನು ಅವರ ಹಕ್ಕಿನಲ್ಲಿರುವ ರಜೆ ಮಂಜೂರು ಮಾಡುವಂತೆ ಅಥವಾ ಅವರ ಲೆಕ್ಕದಲ್ಲಿ ರಜೆಗಳು ಇಲ್ಲದಿದ್ದಲ್ಲಿ ವೇತನ ರಹಿತ ರಜೆ ಮಂಜೂರು ಮಾಡುವಂತೆ ಶಿಫಾರಸ್ಸು ಮಾಡಿರುವ ಮೇರೆಗೆ ಈ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 40 ಸಅಅ 2005, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2005**

ಶ್ರೀ ಜಿ. ಪಾಪಯ್ಯ ರಾಜು, ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರು ಕಛೇರಿಗೆ ಗೈರು ಹಾಜರಾದ ಒಟ್ಟು 105 ದಿನಗಳಿಗೆ ಅವರ ಖಾತೆಯಲ್ಲಿ ಜಮೆ ಇರುವ ಗಳಿಕೆ ರಜೆ: ಅರ್ಧ ವೇತನ ರಜೆಯನ್ನು ಗಮನದಲ್ಲಿರಿಸಿಕೊಂಡು 89 ದಿನಗಳಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 106-ಎ ಅನುಸಾರ ವೇತನ ರಹಿತ ರಜೆ, 13 ದಿನಗಳಿಗೆ ಗಳಿಕೆ ರಜೆಯನ್ನು ಹಾಗೂ 3 ದಿವಸಗಳಿಗೆ ಪರಿವರ್ತಿತ ರಜೆಯನ್ನು ಮಂಜೂರು ಮಾಡಲಾಗಿದೆ. ಹಾಗೂ ಈ 89 ದಿನಗಳು ಗೈರು ಹಾಜರಿಯ ಅವಧಿಯನ್ನು ಅಸಾಧಾರಣ ರಜೆಗೆ ಜಮೆ ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.360

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು-2).

**ವಿಷಯ :** ಶ್ರೀ ವಿ. ಬಿ. ಹಿರೇಗೌಡರ್ ನಿವೃತ್ತ ಕೆ.ಎ.ಎಸ್., ಅಧಿಕಾರಿ ವಿರುದ್ಧ ಇಲಾಖಾ ವಿಚಾರಣೆ ಆರೋಪ ಮುಕ್ತಗೊಳಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ನೋಟೀಸ್ ಸಂಖ್ಯೆ: ಸಿಆಸುಇ 121 ಎಸ್‌ಇಎನ್ 2002, ದಿನಾಂಕ: 1.1.2003.
2. ಶ್ರೀ ವಿ. ಬಿ. ಹಿರೇಗೌಡರ್, ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರ ಉತ್ತರ ದಿನಾಂಕ: 12.10.2003.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 121 ಎಸ್‌ಇಎನ್ 2002, ದಿನಾಂಕ: 29.5.2004.
4. ಶ್ರೀ ಸಿ. ಕೆ. ಬಾಲಕೃಷ್ಣ ನಿವೃತ್ತ ಜಿಲ್ಲಾ ನ್ಯಾಯಾಧೀಶರ ದಿನಾಂಕ: 10.1.2005 ರ ವರದಿ.

**ಪ್ರಸ್ತಾವನೆ:**

ಶ್ರೀ ವಿ. ಬಿ. ಹಿರೇಗೌಡರ್ ನಿವೃತ್ತ ಕೆ.ಎ.ಎಸ್. ಅಧಿಕಾರಿ ಅವರು ತಮ್ಮ ನಿಜವಾದ ಜನ್ಮ ದಿನಾಂಕ: 6.9.1944 ಆಗಿದ್ದರೂ ಸಹ ಉದ್ದೇಶ ಪೂರ್ವಕವಾಗಿ ಸತ್ಯ ಸಂಗತಿಯನ್ನು ಮುಚ್ಚಿಟ್ಟು 58 ವರ್ಷಗಳ ವಯೋಮಿತಿ ನಂತರವೂ ಸೇವೆಯಲ್ಲಿ ಮುಂದುವರಿಯುವ ದುರುದ್ದೇಶದಿಂದ ತಮ್ಮ ಜನ್ಮದಿನಾಂಕವನ್ನು ದಿನಾಂಕ: 6.9.1945 ಎಂದು ಸರ್ಕಾರಕ್ಕೆ ತಪ್ಪು ಮಾಹಿತಿ ನೀಡುವ ಮೂಲಕ ತೀವ್ರ ದುರ್ನಡತೆ ಎಸಗಿದ ಆರೋಪಕ್ಕಾಗಿ ಅವರಿಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 1.1.2003ರ ನೋಟೀಸ್ ನೀಡಿ ಸಮಜಾಯಿಷಿ ಕೇಳಲಾಯಿತು. ಈ ನೋಟೀಸ್‌ಗೆ ಆರೋಪಿ ನಿವೃತ್ತ ಅಧಿಕಾರಿಯು ಮೇಲೆ (2) ರಲ್ಲಿ ಓದಲಾದ ದಿನಾಂಕ: 12.10.2003ರ ಉತ್ತರ ನೀಡಿ ಆರೋಪಗಳನ್ನು ನಿರಾಕರಿಸಿದ್ದಾರೆ. ಅವರ ಉತ್ತರವು ಮನಗಾಣಿಸುವ ರೀತಿಯಲ್ಲಿಲ್ಲದಿರುವ ಕಾರಣ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ. ಸರ್ಕಾರವು ಮೇಲೆ (3)ರಲ್ಲಿ ಓದಲಾದ ದಿನಾಂಕ: 29.5.2004ರ ಸರ್ಕಾರಿ ಆದೇಶದಲ್ಲಿ ಶ್ರೀ ಸಿ. ಕೆ. ಬಾಲಕೃಷ್ಣ, ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (4) ರಲ್ಲಿ ಓದಲಾದ ದಿನಾಂಕ: 10.1.2005ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ ಇವರು ಸೇವೆಗೆ ಸೇರಿದ ನಂತರ ಸರ್ಕಾರಿ ನೌಕರರ ಜನ್ಮ ದಿನಾಂಕ ನಿರ್ಧರಣಾ ಕಾಯ್ದೆಯಡಿ ನಿರ್ಣಯವನ್ನು ಕೈಗೊಂಡು ಮಹಾಲೇಖಪಾಲರಿಗೂ ಮತ್ತು ಅಧಿಕಾರಿಗೂ ತಿಳಿಸಿರುವುದಿಲ್ಲವೆಂದು ಹಾಗೂ ಇವರ ನಿಜವಾದ ಜನ್ಮದಿನಾಂಕದ ಪ್ರಕಾರ ಅವರನ್ನು ಸೇವೆಯಿಂದ ಬಿಡುಗಡೆ ಮಾಡಿದರೂ ಆಪಾದಿತರು ಅದಕ್ಕೆ ಯಾವುದೇ ಅಭ್ಯಂತರ ಹೇಳದೆ ಒಪ್ಪಿಕೊಂಡಿರುತ್ತಾರೆಂದು ಮತ್ತು ಇವರು ಜನ್ಮ ದಿನಾಂಕವನ್ನು ಮುಚ್ಚಿಡಲು ದುರುದ್ದೇಶದಿಂದ ಪ್ರಯತ್ನಿಸಿದ್ದಾರೆಂಬ ಆರೋಪವನ್ನು ಶಿಸ್ತು ಪ್ರಾಧಿಕಾರವು ಸಮರ್ಥನೀಯ ಸಾಕ್ಷ್ಯಾಧಾರಗಳಿಂದ ರುಜುವಾತುಪಡಿಸಿಲ್ಲವೆಂದು ಆದ್ದರಿಂದ ಇವರ ಮೇಲಿನ ಆರೋಪವು ಸಾಭೀತಾಗಿಲ್ಲವೆಂದು ವರದಿ ನೀಡಿರುತ್ತಾರೆ.

ವಿಚಾರಣಾಧಿಕಾರಿಯ ವರದಿಯನ್ನು ಪರಿಶೀಲಿಸಲಾಗಿ ಆಪಾದಿತರು ಅವರ ಎಸ್.ಎಸ್.ಎಲ್.ಸಿ. ಪ್ರಮಾಣ ಪತ್ರ ಲಭ್ಯವಿಲ್ಲವೆಂದು ಸರ್ಕಾರಕ್ಕೆ ಉತ್ತರಿಸುವ ಬದಲು ಅವರೇ ಪ್ರಮಾಣಿಕ ಪ್ರಯತ್ನ ಮಾಡಿ ಪರೀಕ್ಷಾ ಮಂಡಳಿಯಿಂದ ನಿಜವಾದ ಜನ್ಮ ದಿನಾಂಕ ಧೃಡೀಕರಣವನ್ನು ಸರ್ಕಾರಕ್ಕೆ ಸಲ್ಲಿಸಬಹುದಾಗಿತ್ತು. ಇದನ್ನು ಮಾಡದೇ ಅವರು ಅವರ ತಾಯಿಯ ಹೆಸರಿನಲ್ಲಿ ಅಫಿಡೆವಿಟ್ಟನ್ನು ಸಲ್ಲಿಸಿ ಶಾಲೆಯಲ್ಲಿ ದಾಖಲಿಸಿರುವ ಜನ್ಮ ದಿನಾಂಕವು ತಪ್ಪಾಗಿರುತ್ತದೆಂದು ಮಾಹಿತಿ ನೀಡಲು ಪ್ರಯತ್ನಿಸಿರುತ್ತಾರೆ. ಸರ್ಕಾರದ ಜೇಷ್ಠತಾ ಮತ್ತು ಸಿವಿಲ್ ಪಟ್ಟಿಯಲ್ಲಿ ತಪ್ಪಾಗಿ ಮುದ್ರಿಸಲಾಗಿರುವ ಜನ್ಮ ದಿನಾಂಕದ ಬಗ್ಗೆ ಈ ಅಧಿಕಾರಿಯೇ ಗಮನಿಸಿ ಸರ್ಕಾರದ ಗಮನಕ್ಕೆ ತರಬಹುದಾಗಿತ್ತು. ಆದರೆ ಈ ಲೋಪದ ಲಾಭವನ್ನು ಪಡೆಯಲು ಅಧಿಕಾರಿಯು ಪ್ರಯತ್ನಿಸಿರುವುದು ಖಚಿತಪಡುತ್ತದೆ. ಆದಾಗ್ಯೂ ಈ ಅಧಿಕಾರಿಯನ್ನು ಅವರ ನಿಜವಾದ ಜನ್ಮ ದಿನಾಂಕದ ಪ್ರಕಾರವೇ ವಯೋ ನಿವೃತ್ತಿಗೊಳಿಸಿರುವುದರಿಂದ ಮತ್ತು ಸೆಪ್ಟೆಂಬರ್ 2002 ರ ನಂತರ ಇವರಿಗೆ ವೇತನವನ್ನು ನೀಡಿಲ್ಲದಿರುವುದರಿಂದ ಸರ್ಕಾರಕ್ಕೆ ಯಾವುದೇ ನಷ್ಟ ಉಂಟಾಗಿರುವುದಿಲ್ಲ. ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯಲ್ಲಿ ಅಸ್ಪಷ್ಟತೆ ಇದ್ದರೂ ಸಹ ಇವರು ಈಗಾಗಲೇ ನಿವೃತ್ತರಾಗಿರುವುದರಿಂದ ವಿಚಾರಣಾ ವರದಿಯನ್ನು ಒಪ್ಪಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 121 ಎಸ್‌ಇಎನ್ 2002, ಬೆಂಗಳೂರು ದಿನಾಂಕ: 4ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ಶ್ರೀ ವಿ. ಬಿ. ಹಿರೇಗೌಡರ್, ನಿವೃತ್ತ ಕೆ.ಎ.ಎಸ್., ಅಧಿಕಾರಿ ರವರ ವಿರುದ್ಧ ಮಾಡಲಾದ ದೋಷಾರೋಪಣೆಗಳಿಂದ ಸದರಿಯವರನ್ನು ಆರೋಪ ಮುಕ್ತರನ್ನಾಗಿ ಪರಿಗಣಿಸಿ ಆದೇಶಿಸಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ವಿ. ಬಿ. ಹಿರೇಗೌಡರ್‌ರವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.361

**ಎಂ. ವಾಸುದೇವಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ), ಸಿಆಸುಇ (ಸೇವೆಗಳು-3).

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಶ್ರೀಮತಿ ಕೆ. ಹೆಚ್. ಅಕ್ಕಮಹಾದೇವಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ ಗದಗ, ಇವರು ಖಾಯಂ ಪೂರ್ವ ಸೇವಾ ಅವಧಿಯನ್ನು ಘೋಷಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂ: ಮಮಇ 27 ಎಸ್‌ಜೆಡಿ 1999. ದಿನಾಂಕ: 23.4.1999.

2. ನಿರ್ದೇಶಕರ ಪತ್ರ ಸಂ: ನಿಸಿಗೆ, 42/2001-2002 ದಿನಾಂಕ: 20.12.2004.

3. ಸರ್ಕಾರಿ ಆದೇಶ ಸಂ: ಮಮಇ 128 ಎಸ್‌ಜೆಡಿ 2002 ದಿನಾಂಕ: 12.6.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಅಧಿಸೂಚನೆ ಪ್ರಕಾರ ಎರಡು ವರ್ಷಗಳ ಖಾಯಂಪೂರ್ವ ಸೇವಾ ಅವಧಿಯ ಷರತ್ತಿನ ಮೇರೆಗೆ 14 ಪರಿವೀಕ್ಷಣಾಧಿಕಾರಿ ದರ್ಜೆ-1 ರ ಅಧಿಕಾರಿಗಳನ್ನು ನೇಮಕಾತಿ ಮಾಡಲಾಗಿತ್ತು. ಸದರಿ 14 ಪರಿವೀಕ್ಷಣಾಧಿಕಾರಿಗಳ ಪೈಕಿ 10 ಜನ ಖಾಯಂ ಪೂರ್ವ ಸೇವಾ ಅವಧಿಯನ್ನು ಉಲ್ಲೇಖ(3)ರ ದಿನಾಂಕ: 12.6.2003ರ ಸರ್ಕಾರಿ ಆದೇಶದಲ್ಲಿ ಘೋಷಿಸಲಾಗಿತ್ತು. ಈ ರೀತಿ 10 ಅಧಿಕಾರಿಗಳ ಖಾಯಂಪೂರ್ವ ಸೇವಾ ಅವಧಿಯನ್ನು ಘೋಷಿಸುವಾಗ ಶ್ರೀಮತಿ ಕೆ. ಹೆಚ್. ಅಕ್ಕಮಹಾದೇವಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ ಇವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಬಾಕಿ ಇದ್ದ ಪ್ರಯುಕ್ತ ಇವರ ಖಾಯಂಪೂರ್ವ ಸೇವಾ ಅವಧಿಯನ್ನು ಘೋಷಿಸುವುದನ್ನು ಕೈಬಿಡಲಾಗಿತ್ತು. ಆದರೆ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಉಲ್ಲೇಖಿತ (2)ರ ದಿನಾಂಕ: 20.12.2004ರ ಪತ್ರದಲ್ಲಿ ಸದರಿ ನೌಕರರ ವಿರುದ್ಧ ಬಾಕಿ ಇದ್ದ ಇಲಾಖಾ ವಿಚಾರಣೆಯಲ್ಲಿನ ಆರೋಪಗಳಿಂದ ಸದರಿ ಅಧಿಕಾರಿಗಳನ್ನು ಮುಕ್ತಗೊಳಿಸಿ ದಿನಾಂಕ: 19.5.2004 ರಂದು ಆದೇಶವನ್ನು ಹೊರಡಿಸಿರುವುದಾಗಿ ತಿಳಿಸಿ, ಶ್ರೀಮತಿಯವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ ಹಾಗೂ ಇವರ 1999-2000 ರಿಂದ 2002-2003ರ ವರೆಗಿನ ಕಾರ್ಯನಿರ್ವಹಣಾ ವರದಿ ತೃಪ್ತಿಕರವಾಗಿದೆ ಎಂದು ತಿಳಿಸುತ್ತಾ ಶ್ರೀಮತಿಯವರ ಖಾಯಂಪೂರ್ವ ಸೇವಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವುದಾಗಿ ಘೋಷಿಸಬೇಕೆಂದು ಕೋರಿರುತ್ತಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಮಮಇ 61 ಎಸ್‌ಜೆಡಿ 2005 ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2005**

ಶ್ರೀಮತಿ ಕೆ. ಹೆಚ್. ಅಕ್ಕಮಹಾದೇವಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಗದಗ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ದಿನಾಂಕ: 26.4.1999 ರಿಂದ ಎರಡು ವರ್ಷದ ಖಾಯಂಪೂರ್ವ ಸೇವಾ ಅವಧಿಯು ದಿನಾಂಕ: 25.4.2001ಕ್ಕೆ ಮುಕ್ತಾಯಗೊಂಡಿದ್ದು ಇವರು ಖಾಯಂ ಪೂರ್ವ ಸೇವಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು 1977ರ ನಿಯಮ 5 (1)(ಎ)ರ ಪ್ರಕಾರ ದಿನಾಂಕ: 26.4.2001ಕ್ಕೆ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.362

**ಪ್ರ. ದ. ಸಿದ್ಧಾಂತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ :** ಬೆಂಗಳೂರು ನಗರದ ಚೆನ್ನಮ್ಮನಕೆರೆ ಅಚ್ಚುಕಟ್ಟು ಪ್ರದೇಶದಲ್ಲಿ ಹೊಸದಾಗಿ ಪೊಲೀಸ್ ಠಾಣೆ ತೆರೆಯುವ ಬಗ್ಗೆ.

**ಓದಲಾಗಿದೆ :** 1. ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಎಲ್‌ಎನ್(3)/99/ 1999-2000 ದಿನಾಂಕ: 16.01.2003.

**ಪ್ರಸ್ತಾವನೆ:**

ಓದಲಾದ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ದಿನಾಂಕ: 16.01.2003ರ ಪತ್ರದಲ್ಲಿ ಅಧ್ಯಕ್ಷರು ಚೆನ್ನಮ್ಮನಕೆರೆ ಅಚ್ಚುಕಟ್ಟು ನಿವಾಸಿಗಳ ಕ್ಷೇಮಾಭಿವೃದ್ಧಿ ಸಂಘ (ರಿ) ಬೆಂಗಳೂರು ರವರು ಬೆಂಗಳೂರು ನಗರದ ಚೆನ್ನಮ್ಮನಕೆರೆ ಅಚ್ಚುಕಟ್ಟು ಪ್ರದೇಶದಲ್ಲಿ ಪೊಲೀಸ್ ಠಾಣೆ ತೆರೆಯುವುದು ತೀರ ಅವಶ್ಯಕವೆಂದು ನಿವೇದಿಸಿ, ಸಲ್ಲಿಸಿದ ಮನವಿಯನ್ನು ಬೆಂಗಳೂರು ನಗರ ಪೊಲೀಸ್ ಕಮೀಷನರ್ ಪರಿಶೀಲಿಸಿ ಬನಶಂಕರಿ ಪೊಲೀಸ್ ಠಾಣೆಯ ಸರಹದ್ದು ಸುಮಾರು 08 ಚದರ ಕಿಲೋ ಮೀಟರ್ ವಿಸ್ತೀರ್ಣವನ್ನು ಹೊಂದಿದ್ದು, ಈ ಸರಹದ್ದಿನಲ್ಲಿ ಸುಮಾರು 05 ಲಕ್ಷ 40 ಸಾವಿರ ಜನರು ವಾಸವಾಗಿರುತ್ತಾರೆ. ಈ ಸರಹದ್ದಿನಲ್ಲಿ ಭವಾನಿನಗರ, ಯಾರಬ್‌ನಗರ, ಕಾವೇರಿನಗರ, ಕರಿಸಂದ್ರ, ಕದಿರೇನಹಳ್ಳಿ, ಅಂಬೇಡ್ಕರ್ ಕಾಲೋನಿ, ಮಂಜುನಾಥ ಕಾಲೋನಿ, ಕೆ. ಕೆ. ಕಾಲೋನಿ ಯಡಿಯೂರು, ಕತ್ರಿಗುಪ್ಪೆ ಪ್ರದೇಶಗಳಿದ್ದು ಈ ಪ್ರದೇಶಗಳಲ್ಲಿ ಎಲ್ಲಾ ಕೋಮಿನ ಜನರು ವಾಸವಾಗಿರುತ್ತಾರೆ. ಈ ಸರಹದ್ದಿನಲ್ಲಿ 03 ದೊಡ್ಡ ಮಸೀದಿಗಳು ಹಾಗೂ 07 ದೊಡ್ಡ ಹಿಂದೂ ದೇವಾಲಯಗಳಿದ್ದು, ಅಲ್ಲದೆ ಮಾಜಿ ಪ್ರಧಾನಿ ಹಾಗೂ ಅವರ ಕುಟುಂಬ ಸದಸ್ಯರುಗಳ ವಾಸದ ಮನೆಗಳಿದ್ದು ಇವರಿಗೆ ರಕ್ಷಣೆಯನ್ನು ಒದಗಿಸಬೇಕಾಗಿರುತ್ತದೆ. ಇದರ ಜೊತೆಗೆ ಬಿಡಿಎ ಷಾಪಿಂಗ್ ಕಾಂಪ್ಲೆಕ್ಸ್, ಕೆ.ಆರ್. ರಸ್ತೆ, ಕನಕಪುರ ಮುಖ್ಯರಸ್ತೆಯ ಉದ್ದಕ್ಕೂ ವ್ಯಾಪಾರ ಮಳಿಗೆಗಳು 100 ಅಡಿ ರಿಂಗ್‌ರಸ್ತೆಯಲ್ಲಿ ಪ್ರಮುಖ್ಯವಾಗಿ ಜನತಾಬಜಾರ್, ವುಡ್‌ವರ್ಲ್ಡ್ ವ್ಯಾಪಾರದ ಮಳಿಗೆ, ಕಾಮಾಕ್ಷಿ ಚಿತ್ರಮಂದಿರವಿದ್ದು ಪ್ರತಿನಿತ್ಯವು ಗಸ್ತಿಗಾಗಿ ಹೆಚ್ಚಿನ ಪೊಲೀಸ್ ಸಿಬ್ಬಂದಿಯನ್ನು ನೇಮಿಸಬೇಕಾಗಿರುತ್ತದೆ. ಈ ಸರಹದ್ದಿನಲ್ಲಿ ಅಪಹರಣ ಪ್ರಕರಣಗಳು ಜಾಸ್ತಿಯಾಗುವ ಸಂಭವವಿರುವುದರಿಂದ ಮಾತೃಠಾಣೆಯಾದ ಬನಶಂಕರಿ ಪೊಲೀಸ್ ಠಾಣೆಗೆ ಮಂಜೂರಾಗಿರುವ ಪೊಲೀಸ್ ಸಿಬ್ಬಂದಿ ಕಡಿಮೆಯಿರುತ್ತದಾದ್ದರಿಂದ ಹೆಚ್ಚಿನ ಜನ ಸಾಂದ್ರತೆಯನ್ನು ಹೊಂದಿರುವ ಚೆನ್ನಮ್ಮನಕೆರೆ ಅಚ್ಚುಕಟ್ಟು ಪ್ರದೇಶದಲ್ಲಿ ಹೊಸ ಪೊಲೀಸ್ ಠಾಣೆಯನ್ನು ತೆರೆಯುವುದು ಅವಶ್ಯವಾಗಿರುತ್ತದೆ.

ಬನಶಂಕರಿ ಪೊಲೀಸ್ ಠಾಣೆ ಹಾಗೂ ಗಿರಿನಗರ ಪೊಲೀಸ್ ಠಾಣೆ ವ್ಯಾಪ್ತಿಯಿಂದ ಒಟ್ಟು 37 ಪ್ರದೇಶಗಳನ್ನು ಪ್ರಸ್ತಾಪಿತ ಪೊಲೀಸ್ ಠಾಣೆಯ ವ್ಯಾಪ್ತಿಗೆ ಸೇರಿಸ ಬಹುದಾಗಿದ್ದು ಈ ಪ್ರದೇಶಗಳ ವ್ಯಾಪ್ತಿಯು ಸುಮಾರು 03 ಚದರ ಕಿಲೋ ಮೀಟರ್ ಇರುತ್ತದೆ ಹಾಗೂ 02 ಲಕ್ಷ ಜನಸಂಖ್ಯೆಯನ್ನು ಹೊಂದಿರುತ್ತದೆ. ಪ್ರಸ್ತಾಪಿತ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಅಪರಾಧಗಳ ಹಾಗೂ ಕಾನೂನು ಸುವ್ಯವಸ್ಥೆಯ ದೃಷ್ಟಿಯಿಂದ ಅತಿ ಸೂಕ್ಷ್ಮ ಪ್ರದೇಶಗಳಾಗಿರುತ್ತದೆ. ಆದುದರಿಂದ ಪಿಐ-1, ಪಿಎಸ್‌ಐ-2, ಹೆಚ್‌ಸಿ-17, ಮಹಿಳಾ ಹೆಚ್‌ಸಿ-1, ಪಿಸಿ-51, ಮಹಿಳಾ ಪಿಸಿ-3, ಒಟ್ಟು 79 ಸಿಬ್ಬಂದಿ ಬಲದೊಡನೆ ಪೊಲೀಸ್ ಠಾಣೆ ತೆರೆಯುವುದು ಅವಶ್ಯವಾಗಿರುತ್ತದೆ.

ಪ್ರಸ್ತಾಪಿತ ಪೊಲೀಸ್ ಠಾಣೆ ತೆರೆಯಲು ತಗಲುವ ಒಟ್ಟು ವೆಚ್ಚ ರೂ.72,59,968=00 (ಎಪತ್ತೆರಡು ಲಕ್ಷ ಐವತ್ತೊಂಭತ್ತು ಸಾವಿರದ ಒಂಭೈನೂರ ಆರವತ್ತೆಂಟು ರೂಪಾಯಿಗಳು ಮಾತ್ರ) ಗಳಾಗಿದ್ದು, ಇದರಲ್ಲಿ ಆವರ್ತಕ ವೆಚ್ಚ ರೂ. 65,65,968=00 (ಆರವತ್ತೈದು ಲಕ್ಷ ಅರತ್ತೈದು ಸಾವಿರದ ಒಂಭೈನೂರ ಅರವತ್ತೆಂಟು ರೂಪಾಯಿಗಳು ಮಾತ್ರ) ಮತ್ತು ಅನಾವರ್ತಕ ವೆಚ್ಚ ರೂ.6,94,000=00 (ಆರು ಲಕ್ಷ ತೊಂಭತ್ನಾಲ್ಕು ಸಾವಿರ ರೂ.ಗಳು ಮಾತ್ರ) ಗಳಾಗಿದ್ದು, ಸದರಿ ವೆಚ್ಚವನ್ನು "ಲೆಕ್ಕ ಶೀರ್ಷಿಕೆ 2055-00-800-0-01-125" ಇದರಡಿ ಭರಿಸಲಾಗುವುದೆಂದು ತಿಳಿಸಿ ಚೆನ್ನಮ್ಮನಕೆರೆ ಅಚ್ಚುಕಟ್ಟು ಪ್ರದೇಶದಲ್ಲಿ ಪೊಲೀಸ್ ಠಾಣೆಯನ್ನು ಸೃಜಿಸಲು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಮಂಜೂರಾತಿ ಕೋರಿದ್ದರು.

ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 09 ಪಿಒಪಿ 2003 ಬೆಂಗಳೂರು ದಿನಾಂಕ: 2ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರದ ಚೆನ್ನಮ್ಮನಕೆರೆ ಅಚ್ಚುಕಟ್ಟು ಪ್ರದೇಶದಲ್ಲಿ ಕೆಳಕಂಡ ಷರತ್ತುಗಳಿಗೊಳಪಟ್ಟು ಹೊಸದಾಗಿ ಪೊಲೀಸ್ ಠಾಣೆಯನ್ನು ತೆರೆಯಲು ಸರ್ಕಾರದ ಮಂಜೂರಾತಿ ನೀಡಿದೆ.

ಪ್ರಸ್ತಾಪಿತ ಪೊಲೀಸ್ ಠಾಣೆಯನ್ನು ತೆರೆಯಲು ತಗಲುವ ವೆಚ್ಚವನ್ನು ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಲ್ಲಿಯೇ ಭರಿಸಿಕೊಳ್ಳತಕ್ಕದ್ದು ಹಾಗೂ ಪ್ರಸ್ತಾವನೆಗೆ ಹೆಚ್ಚುವರಿ ಅನುದಾನಕ್ಕೆ ಬೇಡಿಕೆ ಸಲ್ಲಿಸತಕ್ಕದ್ದಲ್ಲ ಎಂಬ ಷರತ್ತಿಗೊಳಪಟ್ಟಿರುತ್ತದೆ.

ಈ ವೆಚ್ಚವನ್ನು 2004-05ನೇ ಸಾಲಿನ ಲೆಕ್ಕಶೀರ್ಷಿಕೆ "2055-00-800-0-01-125 ಹೊಸ ಆರಕ್ಷಕ ಠಾಣೆಯನ್ನು ತೆರೆಯುವುದು" ಇದರಡಿಯಲ್ಲಿ ಒದಗಿಸಲಾದ ಅನುದಾನದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1871-ವೆಚ್ಚ/6/2004 ದಿನಾಂಕ: 29.12.2004ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇಲಾಖೆ, (ಪೊಲೀಸ್ ವೆಚ್ಚ).

ಪಿ.ಆರ್.296

## ಕಂದಾಯ ಸಚಿವಾಲಯ

### ಅಧಿಕೃತ ಜ್ಞಾಪನ

**ಸಂಖ್ಯೆ: ಆರ್‌ಡಿ 05 ಆರ್‌ಎಂಇ 2004 ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2005**

**ವಿಷಯ :** ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದ ದಿನಾಂಕ: 1.1.2005 ರಲ್ಲಿದ್ದಂತೆ ಸಹಾಯಕ ನಿಬಂಧಕರುಗಳ ಅಂತಿಮ ಜೇಷ್ಠತಾ ಪಟ್ಟಿ.

**ಓದಲಾಗಿದೆ :** 1. ನಿಬಂದಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣ, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ: ಸಿಬ್ಬಂದಿ:2:ಸಿಆರ್:41: 2003-2004, ದಿನಾಂಕ: 23.01.2004.

2. ಇದೇ ಸಮಸಂಖ್ಯೆಯ ಅಧಿಕೃತ ಜ್ಞಾಪನ ದಿನಾಂಕ: 21.9.2004.

ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದ ಸಹಾಯಕ ನಿಬಂಧಕರುಗಳ ವೃಂದದ ಪುನರ್ ವಿಮರ್ಶಿತ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವಂತೆ ನಿಬಂಧಕರು, ಕರ್ನಾಟಕ ಮೇಲ್ಮನವಿ ನ್ಯಾಯಾಧೀಕರಣ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದ ಹಿನ್ನೆಲೆಯಲ್ಲಿ ಪರಿಶೀಲಿಸಿ ಕ್ರಮ ಸಂಖ್ಯೆ (1) ರಿಂದ ಕ್ರಮ ಸಂಖ್ಯೆ (15)ರ ವರೆಗೆ ನೀಡಿರುವ ಎಲ್ಲಾ ಮುಂಬಡ್ತಿಗಳನ್ನು ಕೂಲಂಕಷವಾಗಿ ಪರಿಗಣಿಸಿ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು, 1957 ರ ನಿಯಮ 10ರ ಅನ್ವಯ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದ ಸಹಾಯಕ ನಿಬಂಧಕರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಉಲ್ಲೇಖ (2)ರ ಅಧಿಕೃತ ಜ್ಞಾಪನದ ಅನುಬಂಧ-1 ರಲ್ಲಿರುವಂತೆ ಪ್ರಕಟಿಸಲಾಗಿ ಆಕ್ಷೇಪಣೆಗಳನ್ನು ಲಿಖಿತ ಮೂಲಕ ಸಲ್ಲಿಸುವಂತೆ ಕೋರಲಾಗಿತ್ತು.

ದಿನಾಂಕ: 21.09.2004 ರಂದು ಪ್ರಕಟಿಸಲಾಗಿರುವ ಸಹಾಯಕ ನಿಬಂಧಕರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಬಗ್ಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ.

ದಿನಾಂಕ: 1.1.2005 ರಲ್ಲಿದ್ದಂತೆ ಕರ್ನಾಟಕ ಮೇಲ್ಮನವಿ ನ್ಯಾಯಾಧಿಕರಣದ ಸಹಾಯಕ ನಿಬಂಧಕರುಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಸರ್ಕಾರವು ಪರಿಶೀಲಿಸಿ, ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತೆ) ನಿಯಮಗಳು 1957ರ ನಿಯಮ 10ರ ಅನ್ವಯ ಒಪ್ಪಿ ಅನುಬಂಧ-1 ರಲ್ಲಿರುವಂತೆ ಅಂತಿಮಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ. ಡಿ. ಓಬಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಕೆಎಟಿ ಮತ್ತು ಬಾ.ನಿ).

**ಕರ್ನಾಟಕ ಮೇಲ್ಮನವರಿ ನ್ಯಾಯಾಧೀಕರಣದ ದಿನಾಂಕ: 1ನೇ ಜನವರಿ 2005 ರಲ್ಲಿದ್ದಂತೆ ಸಹಾಯಕ ನಿಬಂಧಕರುಗಳ ಅಂತಿಮ ಜೇಷ್ಠತಾ ಪಟ್ಟಿ**

| ಕ್ರಮ ಸಂಖ್ಯೆ | ಹೆಸರು **ಶ್ರೀಯುತರು** | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ: | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ: | ಜೇಷ್ಠತೆಗೆ ಅರ್ಹವಾದ ದಿನಾಂಕ | ಷರಾ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ಎಸ್. ಶಂಕರ ರಾವ್ | 13.06.26 | 05.08.50 | 02.06.81 | 02.06.81 | ನಿವೃತ್ತಿ |
| 2. | ಎಂ. ಬಿ. ಹುದ್ದಾರ್ | 04.01.27 | 12.10.51 | 02.06.81 | 02.06.81 | ನಿವೃತ್ತಿ |
| 3. | ಕೆ. ಜಿ. ಗೋಪಾಲರಾವ್ | 08.01.33 | 01.10.58 | 12.11.81 | 12.11.81 | ನಿವೃತ್ತಿ |

| 1 | 2 | 3 | 4 | 5 | 6 | 7 |
|---|---|---|---|---|---|---|
| 4. | ಟಿ. ಎನ್. ಹಂಪಿಹೊಳಿ | 06.04.31 | 21.09.55 | 11.05.82 | 11.05.82 | ನಿವೃತ್ತಿ |
| 5. | ಎಸ್. ಎಂ. ಮೋಹನ್ | 15.05.38 | 25.03.60 | 30.09.89 | 16.06.83 | ನಿವೃತ್ತಿ |
| 6. | ಡಿ. ಲಕ್ಷ್ಮಿದೇವಿ | 08.08.40 | 20.07.61 | 01.11.95 | 30.09.89 | ನಿವೃತ್ತಿ |
| 7. | ಮೊಹಮ್ಮದ್ ಚಾಂದ್‌ಪಾಷ | 04.06.34 | 18.02.52 | 16.06.88 | 01.10.91 | ನಿವೃತ್ತಿ |
| 8. | ಹೆಚ್. ಕೆ. ಶ್ರೀನಿವಾಸ್‌ಮೂರ್ತಿ | 26.10.39 | 13.05.58 | 05.08.92 | 05.08.92 | ನಿವೃತ್ತಿ |
| 9. | ಮೊಹಮ್ಮದ್ ಇಬ್ರಾಹಿಂ | 05.05.37 | 04.05.66 | 28.02.95 | 28.02.95 | ನಿವೃತ್ತಿ |
| 10. | ಜಿ. ಎಸ್. ಹಿರೇಮಠ್ | 05.04.38 | 18.08.61 | - | 01.11.95 | ನಿವೃತ್ತಿ |
| 11. | ಸೈಯದ್ ಮೊಹಮ್ಮದ್ ಹಮೀದ್ | 05.05.38 | 04.03.65 | 31.05.96 | 31.05.96 | ನಿವೃತ್ತಿ |
| 12. | ರಂಗಧಾಮಯ್ಯ | 27.12.43 | 09.10.67<br>01.12.69 | 27.04.98 | 19.06.96 | ನಿವೃತ್ತಿ |
| 13. | ಎ. ಎಲ್. ಕುಂದರಗಿ | 16.05.53 | 28.02.77 | 4.11.02 | 13.08.97 | ನಿವೃತ್ತಿ |
| 14. | ವಿ. ಮುನಿವೆಂಕಟೇಶ್ | 12.01.50 | 23.08.71<br>05.02.81 | 30.10.98 | 30.10.98 | ನಿವೃತ್ತಿ |
| 15. | ಎಸ್. ರಾಜಶೇಖರ್ | 27.10.54 | 28.03.77<br>11.08.80 | 04.11.02 | 04.11.02 | ನಿವೃತ್ತಿ |

**ಬಿ. ಡಿ. ಓಬಪ್ಪ**
ಪಿ.ಆರ್.363 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಕೆಎಟಿ ಮತ್ತು ಬಾ.ನಿ).

**ವಿಷಯ :** ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಮುದಕವಿ ಹೋಬಳಿಯ ಉಮತಾರ ಗ್ರಾಮದ ಸ.ನಂ. 193 ರಲ್ಲಿರುವ ಮೂಲ ಹೆಸರುಗಳನ್ನು ತೆಗೆದುಹಾಕಿ ಬೇರೆಯವರ ಹೆಸರಿಗೆ ಅಕ್ರಮವಾಗಿ ಖಾತೆ ಬದಲಾವಣೆ ಮಾಡಿರುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 488 ಬಿಎಂಎಂ 2004, ಬೆಂಗಳೂರು, ದಿನಾಂಕ: 2.11.2004.
2. ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 488 ಬಿಎಂಎಂ 2004, ಬೆಂಗಳೂರು, ದಿನಾಂಕ: 19.11.2004.
3. ಬೆಳಗಾವಿ ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ: ಕಂಶ:ಸಿಬ್ಬಂದಿ:1/ವಿವ-140/04-05 ದಿನಾಂಕ: 26.11.2004.

**ಪ್ರಸ್ತಾವನೆ:**

ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಮುದಕವಿ ಹೋಬಳಿಯ ಉಮತಾರ ಗ್ರಾಮದ ಸ.ನಂ. 193 ರಲ್ಲಿರುವ ಮೂಲ ಹೆಸರುಗಳನ್ನು ತೆಗೆದುಹಾಕಿ ಬೇರೆಯವರ ಹೆಸರಿಗೆ ಅಕ್ರಮವಾಗಿ ಖಾತೆ ಬದಲಾವಣೆಮಾಡಿ ಕರ್ತವ್ಯ ಲೋಪ ಎಸಗಿರುವ ಸಂಬಂಧಪಟ್ಟ ನೌಕರರುಗಳಾದ (1) ಶ್ರೀ ನದಾಫ್ ತಾಲ್ಲೂಕು ಶಿರಸ್ತೇದಾರಗ ರಾಮದುರ್ಗ (2) ಬಿ. ಬಿ. ತಳವಾಯಿ, ಕಂದಾಯ ನಿರೀಕ್ಷಕ, ಮದಕವಿ ಹೋಬಳಿ ಮತ್ತು (3) ಶ್ರೀ ಹಿರೇಮಠ್, ಗ್ರಾಮ ಲೆಕ್ಕಿಗ, ಉಮತಾರ ಹೋಬಳಿ ಇವರುಗಳನ್ನು ಮೇಲೆ ಓದಲಾದ ಕ್ರಮಸಂಖ್ಯೆ (1) ಹಾಗೂ (2)ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಹೂಡುವುದನ್ನು ಬಾಕಿ ಇರಿಸಿ ಅವರುಗಳನ್ನು ಸೇವೆಯಿಂದ ಅಮಾನತ್ತುಗೊಳಿಸ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದಲ್ಲಿ ಬೆಳಗಾವಿ ಜಿಲ್ಲಾಧಿಕಾರಿಗಳು ಬೈಲಹೊಂಗಲ ಉಪ ವಿಭಾಗಾಧಿಕಾರಿಯವರ ಮೂಲಕ ಮೇಲಿನ ಪ್ರಕರಣ ಕುರಿತು ತನಿಖೆ ನಡೆಸಿ ಸಲ್ಲಿಸಿದ ವರದಿಯಂತೆ ರಾಮದುರ್ಗ ತಹಶೀಲ್ದಾರ್, ಆರ್. ಆರ್. ಶಿರಸ್ತೇದಾರ್, ಕಂದಾಯ ನಿರೀಕ್ಷಕರು, ಗ್ರಾಮ ಲೆಕ್ಕಿಗ ಕಂಪ್ಯೂಟರ್ ಆಪರೇಟರ್ ಇವರುಗಳೆಲ್ಲರೂ ತಾವು ತಮ್ಮ ಮಾಡಿರುವುದಾಗಿ ಒಪ್ಪಿಕೊಂಡಿದ್ದು ಇನ್ನುಮುಂದೆ ಇಂತಹ ಘಟನೆಗಳು ಜರುಗದಂತೆ ಎಚ್ಚರವಹಿಸಿ ಕಾರ್ಯನಿರ್ವಹಿಸುತ್ತೇವೆ ಎಂದು ಲಿಖಿತ ಹೇಳಿಕೆ ನೀಡಿರುವುದಾಗಿ ವರದಿ ಮಾಡಿರುತ್ತಾರೆ.

ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸರ್ಕಾರ ಈ ಕೆಳಗಿನಂತೆ ಆದೇಶ ಮಾಡಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 488 ಬಿಎಂಎಂ 2004, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಲಾದ ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 488 ಬಿಎಂಎಂ 2004 ದಿನಾಂಕ: 2.11.2004 ಮತ್ತು 19.11.2004 ರಲ್ಲಿ ಅಮಾನತ್ತುಗೊಳಿಸಲಾದ (1) ಶ್ರೀ ನದಾಫ್ ತಾಲ್ಲೂಕು ಶಿರಸ್ತೇದಾರ್, ರಾಮದುರ್ಗ (2) ಬಿ. ಬಿ. ತಳವಾಯಿ, ಕಂದಾಯ ನಿರೀಕ್ಷಕ, ಮುದಕವಿ ಹೋಬಳಿ ಮತ್ತು (3) ಶ್ರೀ ಹಿರೇಮಠ್, ಗ್ರಾಮ ಲೆಕ್ಕಿಗ, ಉಮತಾರ ಹೋಬಳಿ ಇವರುಗಳನ್ನು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಹೂಡುವುದನ್ನು ಬಾಕಿ ಇಟ್ಟು ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಿಂದ ವಿಮುಕ್ತಿಗೊಳಿಸಿ ಸದರಿಯವರ ಸೇವೆಯನ್ನು ಬಳಗಾವಿ ಜಿಲ್ಲಾಧಿಕಾರಿಗಳ ವಶಕ್ಕೆ ನೀಡಲಾಗಿದೆ. ಸದರಿ ನೌಕರರಿಗೆ ಅವರು ಅಮಾನತ್ತುಗೊಂಡ ಸ್ಥಳದಿಂದ ಬೇರೆ ಸ್ಥಳಕ್ಕೆ ಸ್ಥಳ ನಿಯುಕ್ತಿಗೊಳಿಸುವಂತೆ ಬೆಳಗಾವಿ ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ. ಬಿ. ಗಣಾಚಾರಿ**
ಪಿ.ಆರ್.364 ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ, (ಸೇವೆಗಳು-1).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯ ಸಹಾಯಕ ನಿಯಂತ್ರಕರ ಹುದ್ದೆಗೆ ಸಮಾನಾಂತರವಾದ ಗ್ರೂಪ್ 'ಎ' ಹುದ್ದೆಯೊಂದನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ಟಿಪ್ಪಣಿ ಸಂಖ್ಯೆ: ಸಿಎಂ: 346 ಜಿಇಎನ್ 04, ದಿನಾಂಕ: 3.1.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಟಿಪ್ಪಣಿಯಲ್ಲಿ ಮಾನ್ಯ ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯ ಸಹಾಯಕ ನಿಯಂತ್ರಕರ ಹುದ್ದೆಗೆ ಸಮಾನಾಂತರವಾದ ಗ್ರೂಪ್ 'ಎ' ಹುದ್ದೆಯನ್ನು (ವೇತನ ಶ್ರೇಣಿ ರೂ. 7400-13120) ಸೃಜಿಸಲು ಪ್ರಸ್ತಾವನೆ ಇದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 6 ಸಸಿವಿ 2005, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2005**

ಮಾನ್ಯ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯ ಸಹಾಯಕ ನಿಯಂತ್ರಕರ ಹುದ್ದೆಗೆ ಸಮಾನಾಂತರವಾದ ಗ್ರೂಪ್ 'ಎ' ಹುದ್ದೆಯನ್ನು (ವೇತನ ಶ್ರೇಣಿ ರೂ. 7400-13120) ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲಾಗಿದೆ.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 134 ವೆಚ್ಚ-5/2005, ದಿನಾಂಕ: 17.2.2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.367

**ಯು. ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ, (ಸೇವೆಗಳು-2).

## ಇಂಧನ ಸಚಿವಾಲಯ

**ವಿಷಯ :** ಮೆಸರ್ಸ್ ಹೇಮಾವತಿ ಪವರ್ ಅಂಡ್ ಲೈಟ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 8 ಮೆಗಾವ್ಯಾಟ್ ಸಾಮರ್ಥ್ಯದ ಹೇಮಾವತಿ ರಿವರ್ ಬೆಡ್ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 75 ಎನ್‌ಸಿಇ 2002, ದಿನಾಂಕ: 16.4.2002.
2. ಸರ್ಕಾರಿ ಆದೇಶ ಸಂಖ್ಯೆ: ಇಂಇ 75 ಎನ್‌ಸಿಇ 2002 ದಿನಾಂಕ: 16.7.2002.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ ಹೇಮಾವತಿ ರಿವರ್ ಬೆಡ್/2004/375, ದಿನಾಂಕ: 22.2.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಮೆಸರ್ಸ್ ಹೇಮಾವತಿ ಪವರ್ ಅಂಡ್ ಲೈಟ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನ ಗೊರೂರು ಗ್ರಾಮದಲ್ಲಿ 8 ಮೆಗಾವ್ಯಾಟ್ ಸಾಮರ್ಥ್ಯದ ಹೇಮಾವತಿ ರಿವರ್ ಬೆಡ್ ಕಿರು ಜಲ ವಿದ್ಯುತ್ ಯೋಜನೆಗಾಗಿ ಅನುಮತಿ ನೀಡಲಾಗಿದೆ.

ಸದರಿ ಯೋಜನೆಗಾಗಿ ಕಾಲಾವಕಾಶವನ್ನು 16.4.2005 ರವರೆಗೆ ಮೇಲೆ ಓದಲಾದ (2)ರಲ್ಲಿ ಓದಲಾದ ಆದೇಶದಲ್ಲಿ ವಿಸ್ತರಿಸಲಾಗಿದೆ. ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಸದರಿ ಯೋಜನೆಗೆ ಬೇಕಾಗಿರುವ ಯಂತ್ರೋಪಕರಣಗಳನ್ನು ತರಿಸಿ ಕೊಳ್ಳುವುದರಲ್ಲಿ ತಡವಾಗಿರುವುದರಿಂದ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ಪಿ.ಪಿ.ಎ. ಮಾಡಿಕೊಳ್ಳಬೇಕಾಗಿರುವುದರಿಂದ ಕಾಲಾವಕಾಶವನ್ನು 16.4.2005 ರಿಂದ 15.10.2005ರವರೆಗೆ ವಿಸ್ತರಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 47 ಎನ್‌ಸಿಇ 2005 ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2005**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಮೆಸರ್ಸ್ ಹೇಮಾವತಿ ಪವರ್ ಅಂಡ್ ಲೈಟ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನ ಗೊರೂರು ಗ್ರಾಮದಲ್ಲಿ 8 ಮೆಗಾವ್ಯಾಟ್ ಸಾಮರ್ಥ್ಯದ ಹೇಮಾವತಿ ರಿವರ್ ಬೆಡ್ ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶವನ್ನು ದಿನಾಂಕ: 16.4.2005 ರಿಂದ 15.10.2005ರ (6 ತಿಂಗಳು) ವರೆಗೆ ವಿಸ್ತರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.368

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಕಾಲೇಜುಗಳ ಅಭಿವೃದ್ಧಿಗೆ ಭಾರತ ಸರ್ಕಾರವು ಮಂಜೂರು ಮಾಡಿರುವ ಹಣವನ್ನು ಸಂಬಂಧಿಸಿದ ಸಂಸ್ಥೆಗಳಿಗೆ ಪಾವತಿಸಲು ಆಯವ್ಯಯ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ನಿರ್ದೇಶಕರು, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಇವರ ಪತ್ರ ಸಂಖ್ಯೆ: ಭಾವೈಪ:05: ಸಿಎಸ್‌ಎಸ್: 2004-2005. ದಿನಾಂಕ: 21.12.2004.
2. ಆರ್ಥಿಕ ಇಲಾಖೆಯ ಅಧೀನ ಕಾರ್ಯದರ್ಶಿಯವರ ಪತ್ರ ಸಂಖ್ಯೆ: ಆಇ 4 ಬಿಎಸ್‌ಜಿ 2005, ದಿನಾಂಕ: 22.2.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: 1 ರ ಪತ್ರದಲ್ಲಿ ನಿರ್ದೇಶಕರು, ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ಬೆಂಗಳೂರು ಇವರು ಭಾರತ ಸರ್ಕಾರವು ಭಾರತೀಯ ವೈದ್ಯ ಪದ್ಧತಿ ಮತ್ತು ಯೋಮಿಯೋಪತಿಯ ಅಭಿವೃದ್ಧಿಗೆ ಉತ್ತೇಜನ ನೀಡಲು ಭಾರತೀಯ ವೈದ್ಯ ಪದ್ಧತಿ ಕಾಲೇಜುಗಳ ಅಭಿವೃದ್ಧಿಗಾಗಿ ಸಹಯಾನುಧನವನ್ನು ವಿವಿಧ ಸ್ಕೀಂಗಳಡಿ ಮಂಜೂರು ಮಾಡುತ್ತದೆ. ಪ್ರಸ್ತುತ ಭಾರತ ಸರ್ಕಾರವು ಬಿಡುಗಡೆ ಮಾಡಿದ ಅನುದಾನಗಳ ಹಣವು ರಾಜ್ಯ ಸರ್ಕಾರಕ್ಕೆ ಹೊಂದಾಣಿಕೆಯಾಗಿದ್ದು, ಈ ಬಗ್ಗೆ ಆರ್ಥಿಕ ಇಲಾಖೆಯು 'ಕ್ರೆಡಿಟ್ ಕನಫರ್‌ಮೇಷನ್ ಸ್ಲಿಪ್' ನೀಡಿದೆ. ಸದರಿ

ಹಣವನ್ನು ಭಾರತೀಯ ವೈದ್ಯಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯು ಸಂಬಂಧಪಟ್ಟ ಸಂಸ್ಥೆಗಳಿಗೆ ಬಿಡುಗಡೆ ಮಾಡಬೇಕಾಗಿರುವುದಾಗಿ ನಿರ್ದೇಶಕರು ತಿಳಿಸಿ, ಕೇಂದ್ರ ಸರ್ಕಾರದಿಂದ ರಾಜ್ಯ ಸರ್ಕಾರಕ್ಕೆ ಹೊಂದಾಣಿಕೆಯಾಗಿರುವ ಹಣದ ವಿವರ ಕೆಳಗಿನಂತೆ ದಾಖಲಿಸಲಾಗಿದೆ.

| ಕ್ರ. ಸಂ. | ಕೇಂದ್ರ ಸರ್ಕಾರದಿಂದ ಹಣ ಬಿಡುಗಡೆ ಪತ್ರದ ವಿವರ | ಅನುದಾನ ಪಡೆದ ಸಂಸ್ಥೆ | ಅನುದಾನದ ಮೊತ್ತ ರೂ. ಲಕ್ಷಗಳಲ್ಲಿ | ಆರ್ಥಿಕ ಇಲಾಖೆಯು ಸಿ.ಸಿ.ಸ್ಲಿಪ್ ನೀಡಿದ ದಿನಾಂಕ |
|---|---|---|---|---|
| 1. | ಜಡ್ 15011/35/2004 ಇ ಅಂಡ್ ಸಿ, ಭಾರತ ಸರ್ಕಾರ, ಆಯುಷ್ ದಿನಾಂಕ: 30.9.2004 | 1) ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಕಾಲೇಜು, ಬೆಂಗಳೂರು. (ಕಾಲೇಜಿನ ನಿರ್ಮಾಣ, ಉಪಕರಣ, ಲೈಬ್ರರಿ ಪುಸ್ತಕ, ಕಾರ್ಪಸ್) | ರೂ.37.000 ಲಕ್ಷ | 15.10.2004 28.10.2004 |
| | | 2) ಅಮೃತ್ ಆಯುರ್ವೇದಿಕ್ ವೈದ್ಯಕೀಯ ಕಾಲೇಜ್, ಚಿತ್ರದುರ್ಗ (ಉಪಕರಣ, ಲೈಬ್ರರಿ ಪುಸ್ತಕ, ಕಾರ್ಪಸ್) | ರೂ. 12.00 ಲಕ್ಷ | |
| | | 3) ಎ. ಎಂ. ಶೇಕ್ ಹೋಮಿಯೋಪತಿಕ್ ವೈದ್ಯಕೀಯ ಕಾಲೇಜ್ ಬೆಳಗಾಂ. (ಉಪಕರಣ, ಲೈಬ್ರರಿ ಪುಸ್ತಕ) | ರೂ. 12.00 ಲಕ್ಷ | |
| | | ಒಟ್ಟು | ರೂ.61.00 ಲಕ್ಷ | |
| 2. | ಜಡ್. 15011/35/2004 ಇ ಅಂಡ್ ಸಿ, ಭಾರತ ಸರ್ಕಾರ, ಆಯುಷ್ ದಿನಾಂಕ: 25.10.2004. | 4) ಶ್ರೀ ಶಿವಯೋಗೇಶ್ವರ್ ರೂರಲ್ ಆಯುರ್ವೇದಿಕ್ ಮೆಡಿಕಲ್ ಕಾಲೇಜು ಬೆಳಗಾಂ (ಇಂಚಲ) (ಉಪಕರಣ, ಲೈಬ್ರರಿ ಪುಸ್ತಕ) | ರೂ. 12.00 ಲಕ್ಷ | 3.11.2004 24.11.2004 |
| 3. | ಜಡ್. 15011/39/2003 ಇ ಅಂಡ್ ಸಿ, ಭಾರತ ಸರ್ಕಾರ, ಆಯುಷ್ ದಿನಾಂಕ: 4.12.2003. | 5) ಬಾಪೂಜಿ ಆರ್ಯುವೇದಿಕ್ ವೈದ್ಯಕೀಯ ಕಾಲೇಜ್, ಚಳ್ಳಕೆರೆ, ಕರ್ನಾಟಕ (ಉಪಕರಣ, ಲೈಬ್ರರಿ ಪುಸ್ತಕ). | ರೂ.12.00 ಲಕ್ಷ | |
| | | ಒಟ್ಟು | ರೂ.85.00 ಲಕ್ಷ | |

ಮೇಲೆ ಕ್ರಮ ಸಂಖ್ಯೆ: 2ರಲ್ಲಿ ಓದಲಾದ ಪತ್ರದಲ್ಲಿ ಆರ್ಥಿಕ ಇಲಾಖೆಯು ಕೇಂದ್ರ ಸರ್ಕಾರದ ಯೋಜನೆಯಡಿಯಲ್ಲಿ ಮಂಜೂರಾದ ಸಹಾಯಧನವನ್ನು 2004-05ನೇ ಸಾಲಿನ ಪೂರಕ ಅಂದಾಜಿನಲ್ಲಿ (2ನೇ ಕಂತು) ಹಣ ಬಿಡುಗಡೆ ಮಾಡಿದೆ ಸಂಬಂಧಸಂಸ್ಥೆಗಳಿಗೆ ಸಿ.ಸಿ.ಸ್ಲೀಪ್ ಅಡಿಯಲ್ಲಿ ಪರಿಗಣಿಸಿ ಮಂಜೂರು ಮಾಡಲು ಅನುಮತಿ ನೀಡಿದೆ.

ಪ್ರಸ್ತುತ 2004-05ನೇ ಸಾಲಿನ ಪೂರಕ ಅಂದಾಜು (2ನೇ ಕಂತು) ಅಡಿ ಲೆಕ್ಕಶೀರ್ಷಿಕೆ 2210-0-200-0-05 ಉಪಲೆಕ್ಕ ಶೀರ್ಷಿಕೆ 101 ಸಹಾಯಧನದ ಅಡಿ ಒದಗಿಸಿರುವ ರೂ.285.00 ಲಕ್ಷಗಳಲ್ಲಿ ಒಟ್ಟು ರೂ. 85.00 ಲಕ್ಷ ಸಹಾಯಧನವನ್ನು ಈ ಕೆಳಕಂಡ ಸಂಸ್ಥೆಗಳಿಗೆ ಮಂಜೂರು ಮಾಡಿದೆ.

ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 696 ಪಿಟಿಡಿ 2004, ಬೆಂಗಳೂರು ದಿನಾಂಕ: 4ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ಹೇಳಲಾದ ಅಂಶಗಳನ್ನು ಪರಿಗಣಿಸಿ, ಪ್ರಸ್ತುತ 2004-05ನೇ ಸಾಲಿನ ಪೂರಕ ಅಂದಾಜು (2ನೇ ಕಂತು) ಅಡಿ ಲೆಕ್ಕಶೀರ್ಷಿಕೆ 2210-0-200-0-05 ಉಪಲೆಕ್ಕ ಶೀರ್ಷಿಕೆ 101 ಸಹಾಯಧನದ ಅಡಿ ಒದಗಿಸಿರುವ ರೂ. 285.00 ಲಕ್ಷಗಳಲ್ಲಿ ಒಟ್ಟು ರೂ.85.00 ಲಕ್ಷ ಸಹಾಯಧನವನ್ನು ಈ ಕೆಳಕಂಡ ಸಂಸ್ಥೆಗಳಿಗೆ ಕೇಂದ್ರ ಸರ್ಕಾರವು ವಿದಿಸಿರುವ ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

1) ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಕಾಲೇಜ್, ಬೆಂಗಳೂರು - ರೂ. 37.00 ಲಕ್ಷ
2) ಅಮೃತ್ ಆಯುರ್ವೇದಿಕ್ ವೈದ್ಯಕೀಯ ಕಾಲೇಜ್ ಚಿತ್ರದುರ್ಗ - ರೂ. 12.00 ಲಕ್ಷ
3) ಎ. ಎಂ. ಶೇಕ್‌ಹೋಮಿಯೋಪತಿಕ್ ವೈದ್ಯಕೀಯ ಕಾಲೇಜ್ ಬೆಳಗಾಂ - ರೂ. 12.00 ಲಕ್ಷ
4) ಶ್ರೀ ಶಿವಯೋಗೇಶ್ವರ್ ರೂರಲ್ ಆಯುರ್ವೇದಿಕ್ ಮೆಡಿಕಲ್ ಕಾಲೇಜು ಬೆಳಗಾಂ (ಇಂಚಲ) - ರೂ. 12.00 ಲಕ್ಷ
5) ಬಾಪೂಜಿ ಆರ್ಯುವೇದಿಕ್ ವೈದ್ಯಕೀಯ ಕಾಲೇಜ್, ಚಳ್ಳಕೆರೆ, ಕರ್ನಾಟಕ - ರೂ. 12.00 ಲಕ್ಷ
ಒಟ್ಟು-ಎಂಬತ್ತೈದು ಲಕ್ಷಗಳು ಮಾತ್ರ) ಒಟ್ಟು - ರೂ. 85.00 ಲಕ್ಷ

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಆಕುಕ 301 ಅಂಅಸ 2005, ದಿನಾಂಕ: 01.03.2005ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.369

**ಚೋಮಾನಾಯಕ್ ಜಿ.**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ :** ಡಾ: ಶಶಿಕಲಾ ಬಿ. ನಿಂಬಣ್ಣನವರ್, ವೈದ್ಯಾಧಿಕಾರಿ, ಗ್ರಾಮೀಣ ಆರೋಗ್ಯ ಕೇಂದ್ರ ದುಮ್ಮನಾಢ ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ ಇವರನ್ನು ಗ್ರಾಮೀಣ ಕೃಪಾಂಕದಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲ್ಪಟ್ಟ ಇವರ ಹೆಸರನ್ನು ರದ್ದುಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂ: ಆಕುಕ 580 ಹೆಚ್‌ಎಸ್‌ಹೆಚ್ 99 ದಿನಾಂಕ: 07.12.1999.

2. ಸರ್ಕಾರ ಆದೇಶ ಸಂಖ್ಯೆ: ಆಕುಕ 716 ಹೆಚ್‌ಎಸ್‌ಹೆಚ್ 99 ದಿನಾಂಕ: 20.6.2000.

3. ಸರ್ಕಾರದ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003 ದಿನಾಂಕ: 20.12.2003.

4. ಸರ್ಕಾರಿ ಆದೇಶ ಸಂಖ್ಯೆ: ಆಕುಕ 939 ಹೆಚ್‌ಎಸ್‌ಹೆಚ್ 2003 ದಿನಾಂಕ: 30.12.03.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆಯನ್ವಯ ಡಾ: ಶಶಿಕಲಾ ಬಿ. ನಿಂಬಣ್ಣನವರ್, ವೈದ್ಯಾಧಿಕಾರಿ, ಗ್ರಾಮೀಣ ಆರೋಗ್ಯ ಕೇಂದ್ರ ದುಮ್ಮನಾಢ ಕಲಘಟಗಿ ತಾಲ್ಲೂಕು ಧಾರವಾಡ ಜಿಲ್ಲೆ ಇವರು ಗುತ್ತಿಗೆ ಸೇವೆಯಿಂದ ಸಕ್ರಮಗೊಂಡ ವೈದ್ಯಾಧಿಕಾರಿಯಾಗಿರುತ್ತಾರೆ. ಆದರೆ ಮೇಲೆ (2)ರಲ್ಲಿ ಓದಲಾದ ಅಧಿಸೂಚನೆಯನ್ವಯ ಡಾ: ಶಶಿಕಲಾ ಬಿ. ನಿಂಬಣ್ಣನವರ್ ಇವರು ನೇರ ನೇಮಕಾತಿಯಲ್ಲಿಯೂ ಆಯ್ಕೆಯಾಗಿ ಪ್ರಾಥಮಿಕ ಆರೋಗ್ಯ ಕೇಂದ್ರ, ದುಮ್ಮವಾಡ, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ ಇಲ್ಲಿ ನಿಯುಕ್ತಿಗೊಳಿಸಲಾಗಿತ್ತು. ಸರ್ವೋಚ್ಚ ನ್ಯಾಯಾಲಯದ ಆದೇಶದ ಹಿನ್ನೆಲೆಯಲ್ಲಿ ಸದರಿ ವೈದ್ಯರು ಗ್ರಾಮೀಣ ಅಂಕದ ಆಧಾರದ ನೇಮಕತಿಯಾದ್ದರಿಂದ ಮೇಲೆ (3)ರಲ್ಲಿ ಓದಲಾದ ಆದೇಶದ ಅನುಬಂಧದಲ್ಲಿನ ಕ್ರಮಸಂಖ್ಯೆ: 55ರಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲಾಗಿತ್ತು. ನಂತರ ಮೇಲೆ (4)ರಲ್ಲಿ ಯಾದ ಆದೇಶದಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಲಾಗಿತ್ತು. ಸದರಿ ವೈದ್ಯರು ಗುತ್ತಿಗೆ ಕಡೆಯಿಂದ ಸಕ್ರಮಗೊಂಡ ವೈದ್ಯರಾಗಿರುವುದರಿಂದ ಮೇಲೆ ಓದಲಾದ (3) ಮತ್ತು (4)ರ ಆದೇಶದಲ್ಲಿನ ಅನುಬಂಧದಲ್ಲಿನ ಕ್ರಮ ಸಂಖ್ಯೆ: 55 ರಲ್ಲಿನ ಡಾ: ಶಶಿಕಲಾ ಬಿ. ನಿಂಬಣ್ಣನವರ್ ಇವರ ಹೆಸರನ್ನು ರದ್ದುಗೊಳಿಸಲು ಇರಿಸಲಾಗಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 706 ಹೆಚ್‌ಎಸ್‌ಹೆಚ್ 2004 ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದಾಗಿ ಡಾ: ಶಶಿಕಲಾ ಬಿ. ನಿಂಬಣ್ಣನವರ್, ವೈದ್ಯಾಧಿಕಾರಿ, ಗ್ರಾಮೀಣ ಆರೋಗ್ಯ ಕೇಂದ್ರ ದುಮ್ಮಾಢ ಕಲಘಟಗಿ ತಾಲ್ಲೂಕು ಧಾರವಾಡ ಜಿಲ್ಲೆ, ಇವರನ್ನು ಗುತ್ತಿಗೆ ಸೇವೆಯಿಂದ ಸಕ್ರಮಗೊಂಡ ವೈದ್ಯರಾದ್ದರಿಂದ, ಗ್ರಾಮೀಣ ಕೃಪಾಂಕದ ಅಡಿಯಲ್ಲಿ ಆಯ್ಕೆಗೊಂಡಿರುವ ವೈದ್ಯರೆಂದು ವಿವೇಚನೆಗೊಳಿಸಲ್ಪಟ್ಟ ಹಾಗೂ ಗುತ್ತಿಗೆ ಆಧಾರದ ಮೇಲೆ ನೇಮಿಸಲ್ಪಟ್ಟ ಇವರ ಹೆಸರನ್ನು ಸದರಿ ಆದೇಶಗಳಲ್ಲಿಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.370

**ಸಿ. ಎಸ್. ಜಗದೀಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ :** ಡಾ: ಜಿ. ಕಲ್ಪನ ವೈದ್ಯಾಧಿಕಾರಿ, ಪ್ರಾ.ಆ.ಘಟಕ, ದೇವಾಲದಕೆರೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂ: ಆಕುಕ 648 ಹೆಚ್‌ಎಸ್‌ಹೆಚ್ 2002 ದಿನಾಂಕ: 24.8.02.

2. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ: ಮೈವಿ: 34: 2003-04 ದಿನಾಂಕ: 23.09.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯನ್ವಯ ಡಾ: ಜಿ. ಕಲ್ಪನೆ ಇವರು ಸಾಮಾನು ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ನೇಮಕಾತಿ ಹೊಂದಿರುತ್ತಾರೆ. ಅದರಂತೆ ದಿನಾಂಕ: 1.9.2002 ರಂದು ಪ್ರಾಥಮಿಕ ಆರೋಗ್ಯ ಘಟಕ, ದೇವಾಲದಕೆರೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ, ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ತದನಂತರ ದಿನಾಂಕ: 1.2.2003 ರಿಂದ ಉನ್ನತ ವ್ಯಾಸಂಗಕ್ಕಾಗಿ ವೇತನರಹಿತ ರಜೆಯನ್ನು ಕೋರಿ ಅನುಮತಿ ಪಡೆಯದೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದಾಗಿ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು, ಹಾಸನ ಜಿಲ್ಲೆ ಇವರು ತಿಳಿಸಿರುವ ಮೇರೆಗೆ ಮೇಲೆ ಕ್ರಮಾಂಕ (2) ರಲ್ಲಿನ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಸದರಿ ವೈದ್ಯರ ಖಾಯಂಪೂರ್ವ ಸೇವಾವಧಿಯನ್ನು ಇದುವಾಗಲೇ ಅನಧಿಕೃತ ಗೈರುಹಾಜರಾಗಿರುವುದರಿಂದ ಖಾಯಂಪೂರ್ವ ಸೇವಾ ನಿಯಮಗಳಡಿಯಲ್ಲಿ ಸಮಾಪನೆ ವಿಮೋಚನೆಗೊಳಿಸುವಂತೆ ಕೋರಿರುತ್ತಾರೆ. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 748 ಹೆಚ್‌ಎಸ್‌ಹೆಚ್ 2004 ಬೆಂಗಳೂರು, ದಿನಾಂಕ: 25ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಡಾ: ಬಿ. ಕಲ್ಪನೆ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಪ್ರಾಥಮಿಕ ಆರೋಗ್ಯ ಘಟಕ, ದೇವಾಲದಕೆರೆ, ಸಕಲೇಶಪುರ ತಾಲ್ಲೂಕು, ಹಾಸನ ಜಿಲ್ಲೆ ಇವರು ದಿನಾಂಕ: 1.2.2003 ರಿಂದ ಖಾಯಂ ಪೂರ್ವ ಸೇವಾವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ಕರ್ತವ್ಯಚ್ಯುತಿ ಎಸಗಿರುವುದರಿಂದ ಸದರಿಯವರನ್ನು ದಿನಾಂಕ: 1.2.2003 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಖಾಯಂಪೂರ್ವ) ನಿಯಮಾವಳಿ 1977ರ ಉಪನಿಯಮ 6ರ ಅಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.371

**ಸಿ. ಎಸ್. ಜಗದೀಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ :** ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ, ಜಿಲ್ಲಾ ವ್ಯಾಪ್ತಿಯಲ್ಲಿರುವ ಆಯುರ್ವೇದ, ಹೋಮಿಯೋಪತಿ ಮತ್ತು ಯುನಾನಿ ಆಸ್ಪತ್ರೆ, ಚಿಕಿತ್ಸಾಲಯಗಳ ಆಡಳಿತಾತ್ಮಕ ಅಧಿಕಾರವನ್ನು ಆಯಾಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ವ್ಯಾಪ್ತಿಗೆ ವಹಿಸುವ ಬಗ್ಗೆ.

**ಪ್ರಸ್ತಾವನೆ:**

ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ವ್ಯಾಪ್ತಿಯಲ್ಲಿರುವ ಆಡಳಿತವನ್ನು ಚುರುಕುಗೊಳಿಸಲು, ಹಾಗೂ ವೈದ್ಯರು/ ಸಿಬ್ಬಂದಿ ವರ್ಗ ಸಮರ್ಪಕವಾಗಿ ಕರ್ತವ್ಯ ನಿರ್ವಹಿಸುವ ಹಿತ ದೃಷ್ಠಿಯಿಂದ ಆಯಾ ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಆಯುರ್ವೇದ, ಹೋಮಿಯೋಪತಿ ಮತ್ತು ಯುನಾನಿ ಆಸ್ಪತ್ರೆ, ಚಿಕಿತ್ಸಾಲಯಗಳ ಆಡಳಿತಾತ್ಮಕ ಅಧಿಕಾರವನ್ನು ಆಯಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ವ್ಯಾಪ್ತಿಗೆ ತರಲು ಸರ್ಕಾರವು ತೀರ್ಮಾನಿಸಿದೆ ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 87 ಪಿಐಎಂ 2005 ಬೆಂಗಳೂರು ದಿನಾಂಕ: 4ನೇ ಮಾರ್ಚ್ 2005**

ಪ್ರಸ್ತಾವನೆಯಲ್ಲಿ ಹೇಳಲಾಗಿರುವ ಅಂಶಗಳನ್ನು ಪರಿಗಣಿಸಿ, ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ಜಿಲ್ಲಾ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಸರ್ಕಾರಿ ಆಯುರ್ವೇದ, ಹೋಮಿಯೋಪತಿ, ಯುನಾನಿ ಮತ್ತು ಪ್ರಕೃತಿ ಆಸ್ಪತ್ರೆ, ಮತ್ತು ಚಿಕಿತ್ಸಾಲಯಗಳ ಆಡಳಿತಾಧಿಕಾರವನ್ನು ಈ ಕೂಡಲೇ ಜಾರಿಗೆ ಬರುವಂತೆ, ಹಾಗೂ ಮುಂದಿನ ಆದೇಶದ ವರೆಗೆ ಆಯಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ವ್ಯಾಪ್ತಿಗೆ ನೀಡಲಾಗಿದೆ.

ಈ ಆಡಳಿತಾಧಿಕಾರವನ್ನು ವಿಭಾಗೀಯ ಮಟ್ಟದಲ್ಲಿ ಉಪ ನಿರ್ದೇಶಕರು, ಭಾರತೀಯ ವೈದ್ಯಪದ್ಧತಿಗಳು ಮತ್ತು ಹೋಮಿಯೋಪತಿ ಇಲಾಖೆ, ಇವರುಗಳು ಕರ್ತವ್ಯ ನಿರ್ವಹಿಸುತ್ತಿರುವುದರಿಂದ ಈ ಆಡಳಿತಾಧಿಕಾರವನ್ನು ಬೆಂಗಳೂರು, ಮೈಸೂರು, ಬೆಳಗಾಂ, ಮತ್ತು ಗುಲ್ಬರ್ಗಾ ಜಿಲ್ಲೆಗಳಿಗೆ ಹೊರತುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.372

**ಜೋಮಾನಾಯಕ್ ಜಿ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## FOREST ECOLOGY AND ENVIRONMENT SECRETARIAT

**Sub :** Diversion of 60.00 ha. of forest land for renewal of M.L. No. 1634 in favour of M/s Shri S.V. Srinivasalu in Bellary District, Karnataka.

**Read :**
1. Letter No. A5(BI)MNG:CR/1/99-2000, dated: 14.7.2000 and 18.1.2005 of the Principal Chief Conservator of Forests, Bangalore.
2. State Government letter No. FEE 65 FFM 2000 dated 11.08.2000, 01/04/03 and 28.01.2005.
3. Government of India Ministry of Environment and Forests, New Delhi letter No. F.No. 8-75/2000-FC dated: 11.15.07-2003, 6/8.8.2003, 1/2.7.04 and 2.2.05.

**Preamble:**

1) The Principal Chief Conservatory of Forests had sent proposal vide his letter dated 14.7.2000 read at (1) above for Renewal of M.L.No. 1634 over an area of 60.00 ha. of forest land in Jaisinghpur Village, Sandur Taluk, Bellary District in favour of M/s Sri S. V. Srinivasalu, under section 2 of Forest (Conservation) Act, 1980 for a period of Ten years subject to certain conditions.

2) The proposal of the Principal Chief Conservator of Forest was recommended to Government of India, Ministry of Environment and Forests, New Delhi vide Government letter dated: 11.08.2000 read at (2) above seeking prior approval of Government of India under section 2 of Forest (Conservation) Act, 1980.

3) After careful consideration of the proposal of the State Government, Government of India vide its letter dated: 11/15.07.2003 read at (3) above has agreed in-principle for renewal of M.L.No.1634 over an area of 60.00 ha. of forest land in Jaisinghpur Village, Sandur Taluk, Bellary District in favour of M/s Sri. S.V.Srinivasalu, subject to the fulfilment of certain conditions.

4) The Government of India, Ministry of Environment and Forests, New Delhi vide their letter of 6/8.8.2003 read at (3) above conveyed the approval of temporary working permission for a period of one year for continuing the mining in respect of renewal of Mining Lease No. 1634 in favour of Sri S.V. Srinivasalu over 60.00 ha. of forest land in Bellary District.

5) Thereafter Government of India, Ministry of Environment and Forests, New Delhi vide their letter dated:1/2.7.04 read at (3) above conveyed the approval of the proposal have accorded temporary working permission for another period of six months over already broken up area.

6) In compliance of the conditions stipulated by Government of India vide its letter dated:11/15.07.2003. This compliance report was forwarded to Government of India vide State Government letter dated: 28.01.2005 read at (2) above.

7) Fimally Government of India vide its letter dated: 2.2.2005 read at (3) above has conveyed its general approval under Section 2 of Forest (Conservation) Act, 1980 for diversion of 60.00 ha. of forest land in Jaisinghpur Village, Sandur Taluk, Bellary District in favour of M/s Sri S. V. Srinivasalu, subject to the fulfillment of certain conditions. Hence this order.

**Government Order No. FEE 65 FFM 2000, Bangalore dated: 4th March 2005**

After examining all aspects of the matter and in view of the approval accorded to the proposal by Government of India, Ministry of environment and Forests, New Delhi, Government are pleased to accord its approval for diversion of 60.00 ha. of forest land in Jaisinghpur. Village. Sandur Taluk, Bellary District for renewal of M.L. No. 1634 in favour of M/s Sri S.V. Srinivasalu, Subject to the following conditions.

1. Legal status of forest land shall remain unchanged.
2. Compensatory Afforestation shall be raised and maintained over 22.50 ha. of non-forest land at the project cost.
3. The non-forest land for compensatory afforestation shall be notified by the State Government as RF under section-4 or PF under section-29 of the Indian Forest Act, 1927 or the State Forest Act within a period of 6 months and Nodal Officer (Forest Conservation) shall report the compliance.
4. Safety Zone and the enrichment plantations shall be raised, Maintained and protected by the State Department at the project cost.
5. All the funds obtained as Net Present Value of diverted forest land should be deposited with Compensatory Afforestation Fund Management of Planning Authority (CAMPA).
6. Demarcation of the area will be done on ground at project cost using four feet high RCC Pillars. The pillars shall indicate serial numbers, forward and back bearing and distance between adjacent pillars.
7. Trees shall be felled only when it becomes necessary and under strict supervision of State Forest Department No. trees shall be felled, without permission. The lessee shall not cut any trees without prior permission of the Forest Dept. and all produce of permitted felling shall be handed over to Forest Dept. under cover of receipt.
8. The user agency shall protect the top soil at the project cost.
9. Concurrent reclamation plan shall be executed by the user agency from the very first year and an annual report shall be sent to the Nodal Officer and the Regional CCF, Bangalore. If it is found from the Annual report that the annual programme mentioned in Concurrent Reclamation Plan is not being adhered to by the user agency, the mining activities shall remain suspended till such time the annual programme is completed for that year.
10. Temporary crushing and screening plant shall be allowed tobe installed by the user agency in accordance with the guidelines issued by the Central Government.
11. No labour camps shall be established on the forest land.
12. Sufficient firewood shall be provided by the User agency to the labourers at the project cost after purchase from the State Forest Department/Forest Development Corporation. The lessee shall open a firewood depot to supply firewood to the employees and labourers at the subsidized rates and the quantity to be prescribed by the Deputy Conservator of Forests concerned.
13. Mining shall be done as per the approved mining plan.
14. The User Agency shall ensure that there is no damage to the wildlife.
15. The Forest land shall not be used for any purpose other than that specified in the proposal.
16. The lease period shall be co-terminus with the current lease granted under MMRD Act 1957.
17. The lessee shall pay usual lease rent and supervision charges as prescribed by the Government from time to time.
18. The lessee shall deposit the amount at prevailing rate towards raising of compensatory afforestation over 22.50 ha. in degraded forest land.
19. The lessee shall undertake the afforestation measures in the vacant area of the lease.
20. The lessee shall carryout soil and water conservation measures and other necessary measures as advised by the Forest Department.
21. The lessee shall undertake to protect rigidly the leased area and forest area surrounding the area up to one Km. from the leased area.
22. The lessee shall abide by all the conditions prescribed by Govt. of India and Govt. of Karnataka.
23. The lessee has to pay the Net Present Value (NPV) fixed by the Govt. Notification No. FEE 247 FGL 2002 dated: 17.01.2004.
24. The Lessee shall execure an agreement with the Forest Dept. among himself to abide by all usual conditions and terms as per orders of the Govt. as well as Principal Chief Conservator of Forests.
25. The lessee shall take-up the planting work on the static dumps during the advance mining operations.
26. In case of violation of agreement conditions, the State Government and authorized Deputy Conservator of Forests, Bellary under section 82 cases forfeit the lease to suspend the mining activities or resume the land to Department.
27. Any other condition that the State Government or the Chief Conservator of Forests (Central), Regional Officer, Bangalore may impose from time to time for the protection to improvement of flora and fauna in the forest area in the interest of conservation, protection and development of forests.

By Order and in the Name of the Governor of Karnataka,

**S. R. VATSALA**

Under Secretary to Government,

Forests, Ecology and Environment Department.

PR-373

